# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1270 (1486)
ಸದಸ್ಯರ ಹೆಸರು : ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 19.03.2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿ

| ಪ್ರಶ್ನೆ | ಉತ್ತರ |
|---|---|
| ಅ) ಸರ್ಕಾರದ ಎಲ್ಲಾ ಇಲಾಖೆಗಳಲ್ಲಿ ವೃಂದ ಮತ್ತು ನೇಮಕಾತಿ ನಿಯಮಾವಳಿಯನ್ನು ರೂಪಿಸಲಾಗಿದೆಯೇ; (ವಿವರ ನೀಡುವುದು) | ಸರ್ಕಾರದ ಬಹುತೇಕ ಇಲಾಖೆಗಳು ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಿರುತ್ತವೆ. (ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಿರುವ ಇಲಾಖೆಗಳ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ).<br><br>ಸಚಿವಾಲಯದ ಆಡಳಿತ ಇಲಾಖೆಗಳು ತಮ್ಮ ವ್ಯಾಪ್ತಿಗೆ ಒಳಪಡುವ ವಿವಿಧ ಕ್ಷೇತ್ರ ಇಲಾಖೆಗಳ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಿ ಪ್ರಕಟಿಸಬೇಕಾಗುತ್ತದೆ. ಹೊಸದಾಗಿ ಸೃಜಿಸಲಾದ ಇಲಾಖೆಗಳು ಹಾಗೂ ಕ್ಷೇತ್ರ ಇಲಾಖೆಗಳ ವೃಂದ ಮತ್ತು ನೇಮಕಾತಿ ನಿಯಮಗಳ ರಚನೆ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |
| ಆ) ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪ್ರತಿ 3 ವರ್ಷಕ್ಕೊಮ್ಮೆ ಪರಿಷ್ಕರಿಸುವಂತೆ ಸರ್ಕಾರದ ಆದೇಶ ಇದ್ದರೂ ಸಹ ಪಾಲಿಸದಿರಲು ಕಾರಣ ಏನು; | ವಿವಿಧ ಇಲಾಖೆಗಳ ಅಗತ್ಯತೆಗಳನ್ನು ಅಂದರೆ ತಾಂತ್ರಿಕ ವಿದ್ಯಾರ್ಹತೆ ಪರಿಷ್ಕರಣೆ, ನೇರ ನೇಮಕಾತಿ/ ಮುಂಬಡ್ತಿ ಕೋಟಾ, ನೇಮಕಾತಿ ವಿಧಾನ ಪರಿಷ್ಕರಣೆ, ಹುದ್ದೆಗಳ ಸೃಜನೆ, ಉನ್ನತೀಕರಣ, ಇಲಾಖೆಗಳ ಮರುವಿನ್ಯಾಸ ಮುಂತಾದ ಅಂಶಗಳನ್ನು ಪರಿಷ್ಕರಿಸಿ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿಕೊಳ್ಳಬೇಕಾದಲ್ಲಿ ಆರ್ಥಿಕ ಇಲಾಖೆ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, ಸಂಸದೀಯ ವ್ಯವಹಾರಗಳ ಇಲಾಖೆ, ತಾಂತ್ರಿಕ ಶಿಕ್ಷಣ ಇಲಾಖೆ ಸೇರಿದಂತೆ ವಿವಿಧ ಇಲಾಖೆಗಳೊಂದಿಗೆ ಸಮಾಲೋಚಿಸಿದ ನಂತರ ವಿವಿಧ ಹಂತಗಳಲ್ಲಿ ವೃಂದ ಪರಿಶೀಲನಾ ಸಮಿತಿ ಸಭೆಗಳಲ್ಲಿ ಚರ್ಚಿಸಿ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪರಿಷ್ಕರಿಸಬೇಕಾಗುತ್ತದೆ. ಆದಕಾರಣ, ಕೆಲವು ಇಲಾಖೆಗಳಲ್ಲಿ ಈ ನಿಯಮಗಳನ್ನು ಪ್ರತಿ ಮೂರು ವರ್ಷಕ್ಕೊಮ್ಮೆ ಪರಿಷ್ಕರಿಸುವಲ್ಲಿ ವಿಳಂಬವುಂಟಾಗುತ್ತಿದೆ. |
| ಇ) ಎಲ್ಲಾ ಇಲಾಖೆಗಳ ನಿಯಮಗಳನ್ನು ಪರಿಷ್ಕರಿಸಲು ಸರ್ಕಾರದಿಂದ ಯಾವ ಕ್ರಮ ಕೈಗೊಳ್ಳಲಾಗುವುದು; ಹಾಗೂ ಇದಕ್ಕಾಗಿ ಎಷ್ಟು ಸಮಯ ಬೇಕಾಗುತ್ತದೆ? | ಇಲಾಖೆಗಳ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪರಿಷ್ಕರಿಸುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶ ಸಂಖ್ಯೆ: ಸಿಆಸುಇ 97 ಸೇನಿಡಿ 2004, ದಿನಾಂಕ: 08.10.2004, ಸುತ್ತೋಲೆ ಸಂಖ್ಯೆ: ಸಿಆಸುಇ 25 ಸೇನಿಡಿ 2017, ದಿನಾಂಕ: 09.06.2017 ಮತ್ತು 15.12.2017 ಮತ್ತು ಸಿಆಸುಇ 66 ಸೇನಿಡಿ 2019, ದಿನಾಂಕ: 25.09.2019ರಲ್ಲಿ ಕಾಲಕಾಲಕ್ಕೆ ಎಲ್ಲಾ ಇಲಾಖೆಗಳಿಗೆ ಸೂಚನೆಗಳನ್ನು ನೀಡಲಾಗಿದೆ. ಅಲ್ಲದೆ, ಸರ್ಕಾರದ ಅಪರ |

| | |
|---|---|
| | ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ 2018 ನೇ ಸಾಲಿನಲ್ಲಿ ಏರ್ಪಡಿಸಲಾದ ಎಲ್ಲಾ ಇಲಾಖೆಗಳ ಮುಖ್ಯಸ್ಥರ ಸಭೆಯಲ್ಲಿ ವಿವಿಧ ಇಲಾಖೆಗಳ ಹಾಗೂ ಆ ಇಲಾಖೆಗಳ ವ್ಯಾಪ್ತಿಗೊಳಪಡುವ ಎಲ್ಲಾ ಕ್ಷೇತ್ರ ಇಲಾಖೆಗಳ ಹಾಗೂ ಅಂಗ ಸಂಸ್ಥೆಗಳ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಗತಿ ಪರಿಶೀಲನೆಯನ್ನು ನಡೆಸಲಾಗಿದ್ದು, ಈ ಸಭೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸಮಗ್ರವಾಗಿ ಪರಿಶೀಲಿಸಿ, ಪರಿಷ್ಕರಿಸಿ ಪ್ರಕಟಿಸಲು ಎಲ್ಲಾ ಇಲಾಖೆಗಳಿಗೆ ಸೂಚನೆಗಳನ್ನು ನೀಡಲಾಗಿದೆ.<br><br>ಮುಂದುವರೆದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಪ್ರತಿ ತಿಂಗಳೂ ಜರುಗುವ ಎಲ್ಲಾ ಇಲಾಖೆಗಳ ಕಾರ್ಯದರ್ಶಿಗಳ ಮಾಸಿಕ ಪರಿಶೀಲನಾ ಸಭೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಗತಿ ಪರಿಶೀಲನೆ ಮಾಡಲಾಗುತ್ತಿದೆ. |

ಬಿ.ಎಸ್. ಯಡಿಯೂರಪ್ಪ

ಸಂಖ್ಯೆ: ಸಿಆಸುಇ 31 ಸೇನಿಡಿ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ವಿಧಾನ ಪರಿಷತ್ತಿನ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1270 (1486)ರ ಅನುಬಂಧ

**(ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಿರುವ ಇಲಾಖೆಗಳು)**

| ಕ್ರ.ಸಂ. | ಇಲಾಖೆಗಳು ಹಾಗೂ ಇಲಾಖೆಯ ವ್ಯಾಪ್ತಿಗೆ ಒಳಪಡುವ ಕ್ಷೇತ್ರ ಇಲಾಖೆಗಳು |
|---|---|
| 1 | **ಸಿಬ್ಬಂದಿ ಮತ್ತು ಆಡಳಿತ ಸುಧಾರಣ ಇಲಾಖೆ** |
| | i) ಕರ್ನಾಟಕ ಸರ್ಕಾರ ಸಚಿವಾಲಯ |
| | ii) ರಾಜ್ಯಪಾಲರ ಸಚಿವಾಲಯ |
| | iii) ರಾಜ್ಯ ಆತಿಥ್ಯ ಸಂಸ್ಥೆ, ಕರ್ನಾಟಕ ಭವನ ನವದೆಹಲಿ. |
| | iv) ಕರ್ನಾಟಕ ಆಡಳಿತ ಸೇವೆ (ಕೆ.ಎ.ಎಸ್) |
| | v) ಕರ್ನಾಟಕ ರಾಜ್ಯ ಆಡಳಿತ ನ್ಯಾಯ ಮಂಡಳಿ |
| 2 | **ಸಿಆಸುಇ (ಜನಸ್ಪಂದನ)** |
| 3 | **ಸಿಆಸುಇ (ಇ-ಆಡಳಿತ)** |
| 4 | **ಆರ್ಥಿಕ ಇಲಾಖೆ** |
| | i )ಕೆಜಿಐಡಿ |
| | ii) ಲೆಕ್ಕ ಪರಿಶೋಧನೆ ಮತ್ತು ಲೆಕ್ಕಪತ್ರಗಳ ಇಲಾಖೆ |
| | iii) ಖಜಾನೆ ಇಲಾಖೆ |
| | iv) ಸಣ್ಣ ಉಳಿತಾಯ |
| | v) ಅಬಕಾರಿ |
| 5 | **ಕಾನೂನು ಇಲಾಖೆ** |
| | i) ಅಡ್ವೋಕೇಟ್ ಜನರಲ್ ಕಛೇರಿ |
| | ii) ಅಧೀನ ನ್ಯಾಯಾಲಯ |
| 6 | ಸಂಸದೀಯ ವ್ಯವಾಹರಗಳ ಇಲಾಖೆ – ಭಾಷಾಂತರ ನಿರ್ದೇಶನಾಲಯ |
| 7 | **ಒಳಾಡಳಿತಇಲಾಖೆ** |
| | i) ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಪಡೆ |
| | ii) ಪೊಲೀಸ್ ಸೇವೆಗಳು (ಪತ್ತೆದಾರಿ ಧಳ) |
| | iii) ಅಗ್ನಿ ಮತ್ತು ತುರ್ತು ಸೇವೆಗಳು |
| | iv) ಕರ್ನಾಟಕ ಸೆರೆಮನೆ ಸೇವೆಗಳು |
| | v) ವಿಧಿ ವಿಜ್ಞಾನ ಪ್ರಯೋಗಾಲಯ |
| | vi) ಕರ್ನಾಟಕ ರಾಜ್ಯ ಕೈಗಾರಿಕ ಭದ್ರತಾ ಪೊಲೀಸ್ ಪಡೆ |
| | vii) ಹೋಮ್ ಗಾರ್ಡ್ಸ ಮತ್ತು ಸಿವಿಲ್ ಡಿಫೆನ್ಸ್ ಸರ್ವಿಸಸ್ |
| | viii) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ |
| | ix) ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ |
| | x) ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ಸೇವೆಗಳನ್ನೊಳಗೊಂಡ ನೇಮಕಾತಿ ನಿಯಮಗಳು |
| 8 | **ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ** |
| | i) ಪಿ.ಆರ್.ಇ.ಡಿ |
| | ii) ಗ್ರಾಮಪಂಚಾಯಿತಿ |
| | iii) ಕೆ.ಆರ್.ಐ.ಡಿ.ಎಲ್ |
| | iv) ಗ್ರಾಮಿಣ ಕುಡಿಯುವ ನೀರು ಮತ್ತು ನೈರ್ಮಲ್ಯ |

| | |
|---|---|
| 9 | **ಕಂದಾಯಇಲಾಖೆ** |
| | I) ಧಾರ್ಮಿಕ ಧತ್ತಿ ಇಲಾಖೆ |
| | II) ನೋಂದಣಿ ಮತ್ತು ಮುದ್ರಾಂಕ ಇಲಾಖೆ |
| | III) ಭೂಮಾಪನ ಇಲಾಖೆ |
| | IV )ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ |
| 10 | **ಶಿಕ್ಷಣ ಇಲಾಖೆ** |
| | i) ಸಾರ್ವಜನಿಕ ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ) |
| | II) ಪದವಿ ಪೂರ್ವ ಶಿಕ್ಷಣ |
| | III) ಕಾಲೇಜು ಶಿಕ್ಷಣ |
| | IV) ಸಾರ್ವಜನಿಕ ಗ್ರಂಥಾಲಯ |
| | V) ತಾಂತ್ರಿಕ ಶಿಕ್ಷಣ |
| | Vi) ಮುದ್ರಣ ಲೇಖನ ಮತ್ತು ಪ್ರಕಟನೆಗಳ ಇಲಾಖೆ |
| | VII) ಲೋಕ ಶಿಕ್ಷಣ ಇಲಾಖೆ |
| | VIII) ಎನ್.ಸಿ.ಸಿ |
| | IX) ಗೆಜೆಟಿಯರ್ ಇಲಾಖೆ |
| 11 | **ವಾಣಿಜ್ಯ ಮತ್ತು ಕೈಗಾರಿಕ ಇಲಾಖೆ** |
| | I) ಕೈಮಗ್ಗ ಮತ್ತು ಜವಳಿ |
| | II) ಗಣಿ ಮತ್ತು ಭೂವಿಜ್ಞಾನ |
| | III) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ |
| | IV ) ಸಕ್ಕರೆ ನಿರ್ದೇಶನಾಲಯ |
| 12 | **ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ** |
| 13 | **ನಗರಾಭಿವೃದ್ಧಿ ಇಲಾಖೆ** |
| | I) ನಗರ ಯೋಜನಾ ಇಲಾಖೆ |
| | II) ಪೌರಾಡಳಿತ ನಿರ್ದೇಶನಾಲಯ |
| | iii) ವಸತಿ ಇಲಾಖೆ |
| 14 | **ಲೋಕೋಪಯೋಗಿ ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಇಲಾಖೆ** |
| | I) ಲೋಕೋಪಯೋಗಿ ಇಲಾಖೆ |
| | II) ಬಂದರು ಒಳನಾಡು ಜಲಸಾರಿಗೆ ಇಲಾಖೆ |
| | III) ವಾಸ್ತುಶಿಲ್ಪ ಇಲಾಖೆ |
| 15 | **ಜಲಸಂಪನ್ಮೂಲ ಇಲಾಖೆ** |
| | **ಜಲಸಂಪನ್ಮೂಲ ಇಲಾಖೆ (ಕಾಡಾ)** |
| 16 | **ಸಣ್ಣ ನೀರಾವರಿ ಮತ್ತು ಅಂತರ್ಜಲ ಇಲಾಖೆ** |
| 17 | **ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ** |
| | I) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ |
| | II) ಔಷಧ ನಿಯಂತ್ರಣ ಇಲಾಖೆ. |
| | III) ಆಯುಷ್ ನಿರ್ದೇಶನಾಲಯ |
| 18 | **ಕೃಷಿ ಇಲಾಖೆ** |
| 19 | **ತೋಟಗಾರಿಕೆ ಇಲಾಖೆ** |

| | |
|---|---|
| 20 | ರೇಷ್ಮೆ ಇಲಾಖೆ |
| 21 | ಪಶುಸಂಗೋಪನೆ ಇಲಾಖೆ |
| 22 | ಮೀನುಗಾರಿಕೆ ಇಲಾಖೆ |
| 23 | ಅರಣ್ಯಇಲಾಖೆ |
| 24 | ಸಹಕಾರ ಇಲಾಖೆ |
| | I) ಕೃಷಿ ಮಾರುಕಟ್ಟೆ |
| | II) ಸಹಕಾರ ಸಂಘಗಳ ನಿಬಂಧಕರ ಕಛೇರಿ |
| | III) ಸಹಕಾರ ಸಂಘಗಳ ಆಡಿಟ್ ಇಲಾಖೆ |
| 25 | ಸಮಾಜ ಕಲ್ಯಾಣ ಇಲಾಖೆ |
| 26 | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ |
| 27 | ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆ |
| 28 | ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ, ವಿಶಿಷ್ಟ ಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ |
| | I) ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. |
| | II) ವಿಕಲ ಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ |
| 29 | ಕನ್ನಡ ಸಂಸ್ಕೃತಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ |
| | I) ಕನ್ನಡ ಮತ್ತು ಸಂಸ್ಕೃತಿ ಇಲಾಖೆ |
| | II) ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ |
| | III) ರಾಜ್ಯ ಪತ್ರಗಾರ ಇಲಾಖೆ |
| | IV) ಪ್ರಾಚ್ಯ ವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ |
| 30 | ಪ್ರವಾಸೋದ್ಯಮ ಇಲಾಖೆ |
| 31 | ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ |
| | I) ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ |
| | II) ಕಾನೂನು ಮಾಪನಶಾಸ್ತ್ರ |
| 32 | ಕಾರ್ಮಿಕ ಇಲಾಖೆ |
| | I) ಕಾರ್ಮಿಕ ಇಲಾಖೆ |
| | II) ಕಾರ್ಮಿಕ ರಾಜ್ಯ ವಿಮಾ ಸುರಕ್ಷಾ ಯೋಜನೆ ಇಲಾಖೆ |
| | III) ಕಾರ್ಖಾನೆ ಮತ್ತು ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ |
| 33 | ಇಂಧನ ಇಲಾಖೆ |
| 34 | ಸಾರಿಗೆ ಇಲಾಖೆ |
| 35 | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ |
| 36 | ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ |
| | I) ಯೋಜನ ಇಲಾಖೆ |
| | II) ಆರ್ಥಿಕ ಮತ್ತು ಸಂಖ್ಯಿಕ ಇಲಾಖೆ |
| 37 | ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ |
| | I) ಉದ್ಯೋಗ ಮತ್ತು ತರಬೇತಿ ಇಲಾಖೆ |